ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ಕಾರ್ಮಿಕ ಕಲ್ಯಾಣ ಮಂಡಳಿಯಲ್ಲಿ 413.08 ಕೋಟಿ ನಷ್ಟದ ಕುರಿತು

ಶ್ರೀ ಎನ್. ರವಿಕುಮಾರ್(ವಿಧಾನಸಭೆಯಿಂದ ಚುನಾಯಿತರಾದವರು) –

94 (94) ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯು ಆದಾಯ ತೆರಿಗೆ ಕಾಯ್ದೆಯ ಕಲಂ 12ರ ಅನ್ವಯ ದತ್ತಿ ಸಂಸ್ಥೆ ಎಂದು ನೋಂದಣಿ ಮಾಡಿದ ಬಳಿಕ ದತ್ತಿ ಸಂಸ್ಥೆಯು ಆದಾಯ ತೆರಿಗೆ ವಿನಾಯಿತಿ ಕೋರಿ ಮನವಿ ಸಲ್ಲಿಸದಿರಲು ಕಾರಣವೇನು;

(ಆ) ಆದಾಯ ತೆರಿಗೆ ಇಲಾಖೆಯಿಂದ 413.08 ಕೋಟಿ ತೆರಿಗೆ ಬಾಕಿ ಬಗ್ಗೆ ನೋಟೀಸ್ ಬಂದ ಬಳಿಕ ಆದಾಯ ತೆರಿಗೆ ಕಾಯ್ದೆಯನ್ವಯ 30 ದಿನಗಳ ಒಳಗಾಗಿ ಮೇಲ್ಮನವಿ ಸಲ್ಲಿಸದಿರಲು ಕಾರಣವೇನು;

(ಇ) ತೆರಿಗೆ ಬಾಕಿ ಇದೆ ಎಂಬ ನೋಟೀಸ್ ಬಂದ 6 ತಿಂಗಳ ಬಳಿಕ ದಿ:28/08/2018ರಂದು ಆದಾಯ ತೆರಿಗೆ ಕಾಯ್ದೆ ಕಲಂ 10(46) ಅಡಿಯಲ್ಲಿ ತೆರಿಗೆ ವಿನಾಯಿತಿ ಕೋರಿ ಮನವಿ ಸಲ್ಲಿಸಿರುವುದು ತೀವ್ರತರವಾದ ಕರ್ತವ್ಯ ನಿರ್ಲಕ್ಷ್ಯವಲ್ಲವೇ; ಈ ಕುರಿತು ಸರ್ಕಾರದ ನಿಲುವೇನು;

(ಈ) ತೆರಿಗೆ ಬಾಕಿ ಬಗ್ಗೆ ನೋಟೀಸ್ ಬಂದ 6 ತಿಂಗಳವರೆಗೂ ಸದರಿ ನೋಟಿಸಿನ ಮೇಲೆ ಯಾವುದೇ ಕ್ರಮ ಕೈಗೊಳ್ಳದೆ, ಸರ್ಕಾರದ ಗಮನಕ್ಕೂ ತಾರದೆ ನೋಟೀಸನ್ನು ಮುಚ್ಚಿಟ್ಟು ಮಂಡಳಿಗೆ ಆರ್ಥಿಕ ನಷ್ಟ ಮಾಡಲು ಯತ್ನಿಸಿ ಕರ್ತವ್ಯದಲ್ಲಿ ನಿರ್ಲಕ್ಷ್ಯ ವಹಿಸಿದ ಅಧಿಕಾರಿಗಳನ್ನು ಅಮಾನತ್ತು ಮಾಡದಿರಲು ಕಾರಣವೇನು?